

# ಕೋವಿಡ್-19 ಕುರಿತಾದ ಸಂಪನ್ಮೂಲಗಳು

ನಮ್ಮ ಸದ್ಯದ ವೈಜ್ಞಾನಿಕ ತಿಳುವಳಿಕೆಯ ಆಧಾರದ ಮೇಲೆ, ವೈಜ್ಞಾನಿಕ ಸಮುದಾಯವು ಈ ವಿಶ್ವವ್ಯಾಪಿ ಪಿಡುಗಿನ ಕುರಿತಾದ ಕೆಲವು ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸಿದೆ. ಈಗ ಹರಡಿರುವ ವಿಶ್ವವ್ಯಾಪಿ ಕಾಯಿಲೆಯ ಬಗ್ಗೆ ಸಾರ್ವಜನಿಕರಲ್ಲಿ ಅರಿವನ್ನು ಹೆಚ್ಚಿಸಲು ಹಾಗೂ ತಪ್ಪು ಮಾಹಿತಿಗಳನ್ನು ತೊಡೆದು ಹಾಕಲು ಈ ಸಂಪನ್ಮೂಲಗಳನ್ನು ಭಾರತದ ಅನೇಕ ಭಾಷೆಗಳಲ್ಲಿ ಸೃಷ್ಟಿಸಲಾಗಿದ್ದು ಇವು ಉಚಿತವಾಗಿ ದೊರೆಯುತ್ತವೆ. ಇಲ್ಲಿ ಅವುಗಳ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ.

**ಇಂಡಿಯಾ ಬಯೋಸೈನ್ಸ್ (www.indiabioscience.org):**
ಸಂಶೋಧಕರು, ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ನೀತಿ ನಿರೂಪಕರನ್ನು ಒಳಗೊಂಡಂತಹ ಭಾರತದ ಎಲ್ಲ ಭಾಗಗಳ, ವಿಭಿನ್ನ ಜೀವ ವಿಜ್ಞಾನಗಳ ವೃತ್ತಿಪರರನ್ನು ಸಾಮಾನ್ಯ ವೇದಿಕೆಯ ಮೇಲೆ ಒಂದೆಡೆ ಸೇರಿಸಿರುವ ವಿಶಿಷ್ಟ ಯೋಜನೆಯೇ ಇಂಡಿಯಾ ಬಯೋಸೈನ್ಸ್. ಇದು ಜೀವಶಾಸ್ತ್ರಕ್ಕೆ ಸಂಬಂಧಿಸಿದ ಸಂಶೋಧನೆಗಳು ಹಾಗೂ ಅವಕಾಶಗಳನ್ನು ಪ್ರಚುರಪಡಿಸುತ್ತದೆ, ಹಲವಾರು ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಡೆಸುತ್ತದೆ, ಸಂಪನ್ಮೂಲಗಳನ್ನು ಒಟ್ಟುಗೂಡಿಸುತ್ತದೆ ಮತ್ತು ಸಂಗ್ರಹಿಸುತ್ತದೆ. ಹಾಗೂ ಹಲವಾರು ನೀತಿ ನಿರೂಪಣೆಯ ವಿಷಯಗಳಲ್ಲಿ ದೇಶದಲ್ಲಿ ಚರ್ಚೆಗಳನ್ನು ಹುಟ್ಟು ಹಾಕುತ್ತದೆ. ಇದು ಮೂಲತಃ ಭಾರತ ಸರ್ಕಾರದ, ಜೈವಿಕ ತಂತ್ರಜ್ಞಾನ ಇಲಾಖೆಯಿಂದ (ಡಿಬಿಟಿ) ಅನುದಾನ ಪಡೆದುಕೊಳ್ಳುತ್ತದೆ. ಇದು ವಿಶೇಷ ಯೋಜನೆಗಳಿಗೆ ಶಿಕ್ಷಣ ಇಲಾಖೆ ಹಾಗೂ ಡಿಬಿಟಿ/ವೆಲ್‌ಕಮ್ ಟ್ರಸ್ಟ್ ಇಂಡಿಯಾ ಅಲಯನ್ಸ್‌ಗಳಿಂದಲೂ ಸಹ ಅನುದಾನವನ್ನು ಪಡೆದುಕೊಂಡಿದೆ.

**ಕೋವಿಡ್–19ರ ವರದಿ**: ಕೋವಿಡ್–19 ಕ್ಕೆ ಸಂಬಂಧಿಸಿದಂತೆ ಲೇಖನಗಳು, ಪಾಡ್ ಕಾಸ್ಟ್‌ಗಳು (ಡಿಜಿಟಲ್ ಆಡಿಯೊ ಫೈಲುಗಳು), ವಿಡಿಯೊಗಳು ಹಾಗೂ ಇನ್‌ಫೊಗ್ರಾಫಿಕ್ಸ್ (ಮಾಹಿತಿ ಅಥವಾ ದತ್ತಾಂಶದ ದೃಶ್ಯ ರೂಪ ಉದಾ: ನಕ್ಷೆ ಅಥವಾ ರೇಖಾಚಿತ್ರ) ಇವುಗಳನ್ನು ಇಂಡಿಯಾ ಬಯೋಸೈನ್ಸ್ ವೇದಿಕೆಯು ಸೃಷ್ಟಿಸುತ್ತದೆ ಹಾಗೂ ಸಂಗ್ರಹಿಸುತ್ತದೆ. ಇದರಲ್ಲಿ ಇರುವ ವಸ್ತುಗಳೆಂದರೆ, ವಿಶ್ವವ್ಯಾಪಿ ವ್ಯಾಧಿಯ ಕಾಲದಲ್ಲಿ ಕೇಳಿಬರುವ ಪದೇ ಪದೇ ಕೇಳಲಾಗುವ ಪ್ರಶ್ನೆಗಳು (ಎಫ್‌ಎಕ್ಯು), ಸಾಮಾನ್ಯವಾಗಿ ಕಂಡು ಬರುವ ಮಿಥ್ಯೆಗಳು, ನಡೆಯುತ್ತಿರುವ ಪ್ರಸಕ್ತ ಸಂಶೋಧನೆಗಳು ಹಾಗೂ ಸಾಮಾನ್ಯ ಯೋಗಕ್ಷೇಮ. ಇದರಲ್ಲಿರುವ ಬಹುತೇಕ ವಿಷಯಗಳು ಇಂಗ್ಲಿಷ್‌ನಲ್ಲಿವೆ. ಆದರೆ ಕೆಲವು ವಿಷಯಗಳು ಹಿಂದಿ ಹಾಗೂ ಕನ್ನಡದಲ್ಲೂ ಸಹ ಲಭ್ಯವಿವೆ.

**ಕೋವಿಡ್–ಜ್ಞಾನ್ (www.covid-gyan.in)**
ಈ ಜಾಲತಾಣವು ಕೋವಿಡ್–19 ವಿಶ್ವವ್ಯಾಪಿ ಪಿಡುಗಿಗೆ ಸಂಬಂಧಿಸಿದಂತೆ, ಲಭ್ಯವಿರುವ ಅತ್ಯುತ್ತಮ ವೈಜ್ಞಾನಿಕ ತಿಳುವಳಿಕೆಯ ಆಧಾರದ ಮೇಲೆ ಸಿದ್ಧಪಡಿಸಿದಂತಹ ಸಂಪನ್ಮೂಲಗಳ ಒಂದು ಚಟುವಟಿಕೆಯ ಕೇಂದ್ರ ಸ್ಥಾನದಂತೆ ನೆರವಾಗುತ್ತದೆ. ಇದನ್ನು ಭಾರತದ ಕೆಲವು ಅತ್ಯುತ್ತಮ ಸಾರ್ವಜನಿಕ ಬೆಂಬಲಿತ ಸಂಶೋಧನಾ ಸಂಸ್ಥೆಗಳು ಹಾಗೂ ಸಂಬಂಧಪಟ್ಟ ಯೋಜನೆಗಳು ಸಿದ್ಧಪಡಿಸಿವೆ. ಟಾಟಾ ಇನ್ಸ್‌ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ (ಟಿಐಎಫ್‌ಆರ್) ಮತ್ತು ಅದರ ಕೇಂದ್ರಗಳು, ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್ (ಐಐಎಸ್‌ಸಿ), ಟಾಟಾ ಮೆಮೊರಿಯಲ್ ಸೆಂಟರ್(ಟಿಎಂಸಿ), ವಿಜ್ಞಾನ್ ಪ್ರಸಾರ್, ಇಂಡಿಯಾ ಬಯೋಸೈನ್ಸ್ ಮತ್ತು ಇನ್ಸ್‌ಟೆಮ್‌ಗಳು ಇದರಲ್ಲಿ ಭಾಗವಹಿಸುತ್ತಿರುವ ಸಂಸ್ಥೆಗಳು.

**ಅಡಕ**: ಕೋವಿಡ್–ಜ್ಞಾನ್ ಜಾಲತಾಣವು ಲೇಖನಗಳು, ವಿಡಿಯೊಗಳು, ಪಾಡ್‌ಕಾಸ್ಟ್‌ಗಳು (ಡಿಜಿಟಲ್ ಆಡಿಯೊ ಫೈಲುಗಳು), ಇನ್‌ಫೊಗ್ರಾಫಿಕ್ಸ್ (ಮಾಹಿತಿ ಅಥವಾ ದತ್ತಾಂಶದ ದೃಶ್ಯ ರೂಪ ಉದಾ: ನಕ್ಷೆ ಅಥವಾ ರೇಖಾ ಚಿತ್ರ) ಮತ್ತು ನೀವೇ ಮಾಡಿ–ನೋಡಿ ಟುಟೋರಿಯಲ್‌ಗಳನ್ನು ಭಾರತದ 12 ಭಾಷೆಗಳಲ್ಲಿ ಪ್ರಕಟಿಸುತ್ತದೆ. ಇದು ವಸ್ತು ವಿಷಯವಾಗಿ ಕೋವಿಡ್–19 ಕ್ಕೆ ಸಂಬಂಧಿಸಿದ ಸದ್ಯದ ಸಂಶೋಧನೆಗಳು, ಎಫ್‌ಎಕ್ಯುಗಳು (ಪದೇ ಪದೇ ಕೇಳಲಾಗುವ ಪ್ರಶ್ನೆಗಳು) ಹಾಗೂ ಸಾಮಾನ್ಯವಾಗಿ ಕಂಡು ಬರುವ ಮಿಥ್ಯೆಗಳು ಹಾಗೂ ಯೋಗಕ್ಷೇಮದ ಕ್ರಮಗಳನ್ನೂ ಒಳಗೊಳ್ಳುತ್ತದೆ.

**ಇಂಡಿಯನ್ ಸೈಂಟಿಸ್ಟ್ಸ್ ರೆಸ್‌ಪಾನ್ಸ್ ಟು ಕೋವಿಡ್–19 (ಐಎಸ್‌ಆರ್‌ಸಿ) (www.indscicov.in) ಇದರ ಕುರಿತು:**
ವಿಶ್ವವ್ಯಾಪಿ ಪಿಡುಗಿನ ಹಿನ್ನಲೆಯಲ್ಲಿ ಐಎಸ್‌ಆರ್‌ಸಿಯು ಭಾರತೀಯ ವಿಜ್ಞಾನಿಗಳ ಒಂದು ಗುಂಪಿನ ಸ್ವಯಂ ಪ್ರೇರಿತ ಪ್ರಯತ್ನವಾಗಿ ಆರಂಭಗೊಂಡಿದೆ. ಈಗ ಅದು 500ಕ್ಕೂ ಹೆಚ್ಚು ವಿಜ್ಞಾನಿಗಳು, ವೈದ್ಯರು, ಸಾರ್ವಜನಿಕ ಆರೋಗ್ಯದ ಸಂಶೋಧನಾಕಾರರು, ಇಂಜಿನಿಯರುಗಳು, ತಂತ್ರಜ್ಞರು, ವಿಜ್ಞಾನ ಸಂವಹನಕಾರರು, ಪತ್ರಕರ್ತರು ಹಾಗೂ ಅನೇಕ ವಿದ್ಯಾರ್ಥಿಗಳನ್ನು ಸ್ವಯಂಸೇವಕರನ್ನಾಗಿ ಹೊಂದಿದೆ.

**ಅಡಕ**: ಐಎಸ್‌ಆರ್‌ಸಿಯು ಕೋವಿಡ್–19 ರೊಂದಿಗೆ ಸಂಬಂಧ ಹೊಂದಿರುವ ಮಿಥ್ಯೆಗಳು ಹಾಗೂ ಪದೇ ಪದೇ ಕೇಳಲಾಗುವ ಪ್ರಶ್ನೆಗಳು (ಎಫ್‌ಎಕ್ಯು) ಹಾಗೂ ಈ ವಿಶ್ವವ್ಯಾಪಿ ಪಿಡುಗಿನ

ಸಂದರ್ಭದಲ್ಲಿ ಸಾಮಾನ್ಯ ಯೋಗಕ್ಷೇಮದ ಕುರಿತು ಅನೇಕ ಇನ್‌ಫೋಗ್ರಾಫಿಕ್ಸ್ (ಮಾಹಿತಿ ಅಥವಾ ದತ್ತಾಂಶದ ದೃಶ್ಯ ರೂಪ ಉದಾ: ನಕ್ಷೆ ಅಥವಾ ರೇಖಾ ಚಿತ್ರ), ತುಣುಕುಗಳು ಹಾಗೂ ವಿಡಿಯೊಗಳನ್ನು ಒದಗಿಸುತ್ತದೆ. ಈ ವಿಷಯಗಳು 19 ಭಾರತೀಯ ಭಾಷೆಗಳಲ್ಲಿ ಲಭ್ಯವಿದೆ.

**ಡಿಬಿಟಿ: ವೆಲ್‌ಕಮ್ ಟ್ರಸ್ಟ್ ಇಂಡಿಯಾ ಅಲೈಯೆನ್ಸ್ (ಇಂಡಿಯಾ ಅಲೈಯನ್ಸ್) www.indiaalliance.org.**

ಡಿಬಿಟಿ/ ವೆಲ್‌ಕಮ್ ಟ್ರಸ್ಟ್ ಇಂಡಿಯಾ ಅ್ಯಲೈಯನ್ಸ್ (ಇಂಡಿಯಾ ಅ್ಯಲೈಯನ್ಸ್) ಸಂಸ್ಥೆಯು ಭಾರತದಲ್ಲಿ ನಡೆಯುವ ಬಯೊ ಮೆಡಿಕಲ್, ಕ್ಲಿನಿಕಲ್ ಹಾಗೂ ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸಿದಂತಹ ಮೂಲಭೂತ ಸಂಶೋಧನೆಗಳಿಗೆ ಹಣಕಾಸು ನೆರವು ನೀಡುವ ಒಂದು ಸ್ವತಂತ್ರ ಸಾರ್ವಜನಿಕ ದತ್ತಿ ಸಂಸ್ಥೆ. ಇದಕ್ಕೆ ಭಾರತ ಸರ್ಕಾರದ ಬಯೋಟೆಕ್ನಾಲಜಿ ಇಲಾಖೆ (ಡಿಬಿಟಿ– ಡಿಪಾರ್ಟ್‌ಮೆಂಟ್ ಆಫ್ ಬಯೋಟೆಕ್ನಾಲಜಿ) ಹಾಗೂ ಇಂಗ್ಲೆಂಡಿನ ವೆಲ್‌ಕಮ್ ಟ್ರಸ್ಟ್‌ಗಳು ಅನುದಾನವನ್ನು ನೀಡುತ್ತವೆ.

**ಕೋವಿಡ್–19 ರ ಕುರಿತಾದ ಪ್ರಚಾರ:** ಈ ಜಾಲತಾಣವು ವಿಶ್ವವ್ಯಾಪಿ ಪಿಡುಗಿಗೆ ಸಂಬಂಧಿಸಿದಂತೆ ಇಂಡಿಯಾ ಅ್ಯಲೈಯನ್ಸ್ ಹಾಗೂ ಅದರ ಫಲಾನುಭವಿ ಸಂಸ್ಥೆಗಳು ಸಿದ್ಧಪಡಿಸಿರುವ ಅನೇಕ ಇನ್ಫೊಗ್ರಾಫಿಕ್ಸ್ (ಮಾಹಿತಿ ಅಥವಾ ದತ್ತಾಂಶದ ದೃಶ್ಯ ರೂಪ ಉದಾ: ನಕ್ಷೆ ಅಥವಾ ರೇಖಾಚಿತ್ರ), ಲೇಖನಗಳು, ಪರಿಣಿತರೊಂದಿಗೆ ವೆಬಿನಾರ್‌ಗಳು ಹಾಗೂ ಇತರ ಸಂಪನ್ಮೂಲಗಳನ್ನು ಒದಗಿಸುತ್ತದೆ. ಕೋವಿಡ್–19 ರ ಮೂಲ, ಹರಡುವಿಕೆ ಹಾಗೂ ಪ್ರತಿಬಂಧನಾತ್ಮಕ ಕ್ರಮಗಳು, ಫಲಾನುಭವಿ ಸಂಸ್ಥೆಗಳಿಂದ ಸಂಶೋಧನೆ ಹಾಗೂ ಸ್ವಯಂ–ಆರೈಕೆಯ ಸಲಹೆಗಳನ್ನು ಇದು ವಸ್ತು ವಿಷಯವಾಗಿ ಹೊಂದಿರುತ್ತದೆ. ಕೆಲವು ಸಂಪನ್ಮೂಲಗಳು ಅನೇಕ ಭಾರತೀಯ ಭಾಷೆಗಳಲ್ಲಿ ಲಭ್ಯವಿದೆ.

**ವಿಜೇತಾ ರಘುರಾಮ್** ಇಂಡಿಯಾ ಬಯೊಸೈನ್ಸ್‌ನ ಸೈನ್ಸ್ ಎಜುಕೇಷನ್ ವಿಭಾಗದಲ್ಲಿ ಪ್ರೋಗ್ರಾಂ ಮ್ಯಾನೇಜರ್ (ಕಾರ್ಯಕ್ರಮ ವ್ಯವಸ್ಥಾಪಕರು) ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರು ಹೈದರಾಬಾದ್ ನ ಸೆಂಟರ್ ಫಾರ್ ಸೆಲ್ಯುಲರ್ ಅಂಡ್ ಮಾಲಿಕ್ಯುಲರ್ ಬಯಾಲಜಿ (ಸಿಸಿಎಂಬಿ) ಸಂಸ್ಥೆಯಿದ ಬಯೋಫಿಸಿಕ್ಸ್‌ನಲ್ಲಿ ಡಾಕ್ಟರೇಟ್ ಪದವಿಯನ್ನು ಹೊಂದಿದ್ದಾರೆ. ಅವರ ಸಂಪರ್ಕ ವಿಳಾಸ: vijeta@indiabioscience.org.

ಅನುವಾದ: **ಎಚ್ ಜಿ ಜಯಲಕ್ಷ್ಮಿ** । ಪರಿಶೀಲನೆ: **ಎಸ್ ವಿ ಮಂಜುನಾಥ್**